# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 203 (279) |
| ಸದಸ್ಯರ ಹೆಸರು | : | ಶ್ರೀ ಎಸ್. ನಾಗರಾಜು (ಸಂದೇಶ್ ನಾಗರಾಜ್) |
| ಉತ್ತರಿಸುವ ದಿನಾಂಕ | : | 16.07.2019 |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ನಂಜನಗೂಡು ತಾಲ್ಲೂಕು ಹೆಡಿಯಾಲ ಗ್ರಾಮದಲ್ಲಿ, ಬಸ್ ನಿಲ್ದಾಣ ಹಾಗೂ ಪ್ರೌಢಶಾಲೆ ಮುಖ್ಯ ರಸ್ತೆಯಲ್ಲಿ ಕೋಳಿ ತ್ಯಾಜ್ಯ, ಕೋಳಿ ಕಸ ಮೊದಲಾದ ತ್ಯಾಜ್ಯ ರಾಶಿಯನ್ನು ಸುರಿದು ಸ್ವಚ್ಛತೆ ಮತ್ತು ನೈರ್ಮಲ್ಯಕ್ಕೆ ಧಕ್ಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| (ಆ) | ಇದರಿಂದ ಹೊರಡುವ ದುರ್ವಾಸನೆಯಿಂದ ಸಾರ್ವಜನಿಕರು ಮತ್ತು ವಿದ್ಯಾರ್ಥಿಗಳಿಗೆ ತೊಂದರೆಯಾಗಿದ್ದು, ಅವರ ಆರೋಗ್ಯಕ್ಕೆ ಹಾನಿ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದ ಸೊಳ್ಳೆ, ಕ್ರಿಮಿಕೀಟಗಳು ಹೆಚ್ಚಾಗಿ ಡೆಂಗ್ಯೂ ಮೊದಲಾದ ಕಾಯಿಲೆಗಳು ಹರಡುವ ಸಂಭವ ಇದ್ದು, ಕೂಡಲೇ ಇದನ್ನು ಸ್ವಚ್ಛಗೊಳಿಸಿ, ಇಲ್ಲಿ ತ್ಯಾಜ್ಯ ಸುರಿಯುವುದನ್ನು ಪ್ರತಿಬಂಧಿಸಲಾಗುವುದೇ; | ನಂಜನಗೂಡು ತಾಲ್ಲೂಕು ಹೆಡಿಯಾಲ ಗ್ರಾಮದ ಬಸ್ ನಿಲ್ದಾಣ ಹಾಗೂ ಪ್ರೌಢಶಾಲೆ ಮುಖ್ಯರಸ್ತೆಯಲ್ಲಿ ಸ್ವಚ್ಛತೆ ಮಾಡಿಸಲಾಗಿದ್ದು, ಆದರೂ ಸಹ ಸಾರ್ವಜನಿಕರು ಹಾಗೂ ಅಂಗಡಿ ಮಾಲೀಕರು, ಹೋಟೆಲ್ ಮಾಲೀಕರು, ಕೋಳಿ ಮತ್ತು ಮಾಂಸದ ವ್ಯಾಪಾರಿಗಳು ಕಸವನ್ನು ಸುರಿದಿರುತ್ತಾರೆ. ಈ ವಿಷಯ ಗ್ರಾಮ ಪಂಚಾಯತ್ ಗಮನಕ್ಕೆ ಬಂದಿದ್ದು, ದಿನಾಂಕ 05.07.2019 ರಂದು ಸ್ವಚ್ಛತೆ ಮಾಡಿಸಲಾಗಿರುತ್ತದೆ.<br>ತ್ಯಾಜ್ಯವನ್ನು ಸುರಿಯುತ್ತಿದ್ದ ಅಂಗಡಿ ಮಾಲೀಕರು, ಹೋಟೆಲ್ ಮಾಲೀಕರು, ಕೋಳಿ ಮತ್ತು ಮಾಂಸದ ವ್ಯಾಪಾರಿಗಳಿಗೆ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಖುದ್ದು ಭೇಟಿ ನೀಡಿ ಕಸದ ತ್ಯಾಜ್ಯವನ್ನು ಎಲ್ಲೆಂದರಲ್ಲಿ ಸುರಿಯದೇ ನಿಗಧಿಪಡಿಸಿದ ಸ್ಥಳದಲ್ಲಿ ಕಸ ವಿಲೇವಾರಿ ಮಾಡಲು ಪ್ರತಿಬಂಧಿಸಲಾಗಿದೆ<br>ಸ್ವಚ್ಛತೆ ಹಾಗೂ ಘನ ತ್ಯಾಜ್ಯದ ಸೂಕ್ತ ನಿರ್ವಹಣೆ ಕುರಿತು ಸಾರ್ವಜನಿಕ "ಮಾಹಿತಿ ಶಿಕ್ಷಣ ಮತ್ತು ಸಂವಹನ"ದ ಮೂಲಕ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |
| (ಇ) | ಕಳೆದ 2018-19ನೇ ಸಾಲಿನಲ್ಲಿ ಹಾಗೂ 2019-20ನೇ ಸಾಲಿನಲ್ಲಿ ಇದುವರೆಗೆ ಗ್ರಾಮ ಪಂಚಾಯಿತಿಗೆ ಮಂಜೂರಾಗಿರುವ ಕೇಂದ್ರ ಹಾಗೂ ರಾಜ್ಯ ಅನುದಾನದಲ್ಲಿ ಸ್ವಚ್ಛತಾ ಕಾರ್ಯಕ್ಕೆ ಖರ್ಚು ಮಾಡಿರುವ ಹಣ ಎಷ್ಟು (ವಿವರ ಒದಗಿಸುವುದು) ಈ ಅನುದಾನದಿಂದ ಕೈಗೊಂಡಿರುವ ಕಾರ್ಯಗಳು ಯಾವುವು? | 2018-19 ಹಾಗೂ 2019-20ನೇ ಸಾಲಿನಲ್ಲಿ ಇದುವರೆಗೆ ಘನ ತ್ಯಾಜ್ಯ ನಿರ್ವಹಣೆಗಾಗಿ ಕೇಂದ್ರ ಹಾಗೂ ರಾಜ್ಯದ ಅನುದಾನವನ್ನು ವೆಚ್ಚ ಮಾಡಿರುವುದಿಲ್ಲ. ಆದರೆ ಗ್ರಾಮ ಪಂಚಾಯಿತಿ ಸ್ಥಳೀಯ ನಿಧಿ ಯೋಜನೆಯ ತೆರಿಗೆ ವಸೂಲಾತಿಯಲ್ಲಿ ಲಭ್ಯವಿದ್ದ ಅನುದಾನದಲ್ಲಿ 2018-19ನೇ ಸಾಲಿನಲ್ಲಿ ರೂ.28,700/- ಹಾಗೂ 2019-20ನೇ ಸಾಲಿನಲ್ಲಿ ರೂ.35,892/-ಗಳನ್ನು ಸ್ವಚ್ಛತಾ ಕಾರ್ಯಗಳಿಗೆ ವೆಚ್ಚ ಮಾಡಲಾಗಿರುತ್ತದೆ.<br>ಪ್ರಸಕ್ತ ಸಾಲಿನಲ್ಲಿ 1000 ಗ್ರಾಮ ಪಂಚಾಯಿತಿಗಳಲ್ಲಿ ಘನ ತ್ಯಾಜ್ಯ ನಿರ್ವಹಣೆ ಮತ್ತು ಅನುಷ್ಠಾನ ಮಾಡಲು ಉದ್ದೇಶಿಸಲಾಗಿದ್ದು, ಸದರಿ ಗ್ರಾಮ ಪಂಚಾಯಿತಿಯನ್ನು ಇದರಲ್ಲಿ ಸೇರ್ಪಡೆ ಮಾಡಲು ಅಗತ್ಯ ಕ್ರಮವಹಿಸಿಕೊಳ್ಳಲಾಗುತ್ತಿದೆ. |

(ಕೃಷ್ಣ ಬೈರೇಗೌಡ )
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೃಷ್ಣ ಬೈರೇಗೌಡ
ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್